

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಸದಸ್ಯರ ಹೆಸರು | : | ಶ್ರೀ ಪಿ. ಆರ್. ರಮೇಶ್ (ನಾಮನಿರ್ದೇಶನ ಹೊಂದಿದವರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1326 |
| ಉತ್ತರಿಸುವ ಸಚಿವರು | : | ಮಾನ್ಯ ಕೈಮಗ್ಗ ಮತ್ತು ಜವಳಿ, ಸಕ್ಕರೆ ಹಾಗೂ ಕಬ್ಬು ಅಭಿವೃದ್ಧಿ ಸಚಿವರು. |
| ಉತ್ತರಿಸಬೇಕಾದ ದಿನಾಂಕ | : | 08-03-2022 |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಕೈಮಗ್ಗ ಮತ್ತು ಜವಳಿ ಇಲಾಖೆಯಲ್ಲಿ ಜಾರಿಯಲ್ಲಿರುವ ಯೋಜನೆಗಳ ವಿವರ ನೀಡುವುದು: | ಕೈಮಗ್ಗ ಮತ್ತು ಜವಳಿ ಇಲಾಖೆಯಲ್ಲಿ ಜಾರಿಯಲ್ಲಿರುವ ಯೋಜನೆಗಳ ವಿವರ ಈ ಕೆಳಕಂಡಂತಿರುತ್ತದೆ:-<br><br>**<u>ನೇಕಾರ ಪ್ಯಾಕೇಜ್ ಕೈಮಗ್ಗ ಮತ್ತು ಜವಳಿ ಯೋಜನೆಗಳು.</u>**<br><br>1) ನೇಕಾರ್ ಸಮ್ಮಾನ್ ಯೋಜನೆ.<br>2) ಕೈಮಗ್ಗ ನೇಕಾರರಿಗೆ ಸ್ಟೈಫಂಡ್ ತರಬೇತಿ<br>3) ಮೃತ ಕೈಮಗ್ಗ ನೇಕಾರರ ಅಂತ್ಯ ಸಂಸ್ಕಾರದ ವೆಚ್ಚ ಮರುಪಾವತಿ.<br>4) ನಬಾರ್ಡ್ ಪುನರ್ ಧನ ಯೋಜನೆಯಡಿ ಬಡ್ಡಿ ಸಹಾಯಧನ.<br>5) ಮಿತವ್ಯಯ ನಿಧಿ ಯೋಜನೆ.<br>6) ಸಹಕಾರ ಬ್ಯಾಂಕ್‌ಗಳು ನೀಡಿದ ಶೇ.1 ರ ಮತ್ತು ಶೇ.3 ರ ಸಾಲದ ಮೇಲೆ ಬಡ್ಡಿ ಸಹಾಯಧನ.<br>7) ಕೈಮಗ್ಗ ಉತ್ಪನ್ನಗಳ ಮಾರಾಟ ಮೇಲೆ ಶೇ.20 ರ ರಿಬೇಟ್ ಯೋಜನೆ.<br>8) ಕೈಮಗ್ಗ ವಿಕಾಸ ಯೋಜನೆ.<br>9) ಕಚ್ಚಾಮಾಲು ಖರೀದಿ ಮೇಲೆ ಕೈಮಗ್ಗ ಸಹಕಾರ ಸಂಘಗಳಿಗೆ ಪ್ರತಿ ಕೆ.ಜಿ ಗೆ ರೂ.15/- ರ ಸಹಾಯಧನ.<br>10) ಕೈಮಗ್ಗ ಮತ್ತು ಸಲಕರಣೆಗಳ ಸರಬರಾಜು.<br>11) ಕೈಮಗ್ಗಗಳಿಗೆ ನ್ಯೂಮ್ಯಾಟಿಕ್ / ಮೋಟರೈಸ್ಡ್ ಜಕಾರ್ಡ್ ಸಲಕರಣೆಗಳ ಕಿಟ್ ಗಳ ಸರಬರಾಜು.<br>12) 02 ವಿದ್ಯುತ್ ಮಗ್ಗ ಖರೀದಿಗೆ ಸಹಾಯಧನ.<br>13) ಎಲೆಕ್ಟ್ರಾನಿಕ್ ಜಕಾರ್ಡ್ ಖರೀದಿಗೆ ಸಹಾಯಧನ.<br>14) ಮಗ್ಗ ಪೂರ್ವ ಸೌಲಭ್ಯ.<br>15) ಸೈಜಿಂಗ್ ಘಟಕ ಸ್ಥಾಪನೆ.<br>16) ಮಿನಿ ಪವರ್ ಲೂಮ್ ಪಾರ್ಕ್.<br>17) 1 ರಿಂದ 20 ಹೆಚ್.ಪಿ ವರೆಗಿನ ಘಟಕಗಳಿಗೆ ವಿದ್ಯುತ್ ಸಬ್ಸಿಡಿ.<br>18) 150 ಹೆಚ್.ಪಿ.ವರೆಗಿನ ಹೆಚ್.ಟಿ. ವಿದ್ಯುತ್ ಸಂಪರ್ಕ ಹೊಂದಿರುವ ರೇಪಿಯರ್/ ಲಾಳಿರಹಿತ ವಿದ್ಯುತ್ ಮಗ್ಗ ಘಟಕಗಳಿಗೆ ಶೇ.50 ರಷ್ಟು ವಿದ್ಯುತ್ ಸಬ್ಸಿಡಿ.<br>19) ಕೋವಿಡ್ ಪರಿಹಾರಧನ.<br>20) ಪ್ರೊಸೆಸ್ಸಿಂಗ್ ಘಟಕ ಸ್ಥಾಪನೆ.<br>21) SCSP/TSP ರಡಿ ಜವಳಿ ಕ್ಷೇತ್ರಕ್ಕೆ ಸಂಬಂಧಿಸಿದ ಸಣ್ಣ ಮತ್ತು ಅತಿ ಸಣ್ಣ (ಎಸ್.ಎಂ.ಇ) ಘಟಕಗಳ ಸ್ಥಾಪನೆಗೆ ಸಹಾಯಧನ.<br>22) ಸಹಕಾರಿ ನೂಲಿನ ಗಿರಣಿಗಳನ್ನು ಪ್ರೋತ್ಸಾಹಿಸಲು ಪ್ರತಿ ಯೂನಿಟ್‌ಗೆ ರೂ.2/- ರ ವಿದ್ಯುತ್ ಸಬ್ಸಿಡಿ. |

| | | |
|---|---|---|
| | | 23) ಸಹಕಾರಿ ನೂಲಿನ ಗಿರಣಿಗಳು ಭಾರತೀಯ ಹತ್ತಿ ನಿಗಮ (Cotton Corporation of India)ದಿಂದ ಖರೀದಿಸಿದ ಹತ್ತಿಯ ಮೌಲ್ಯದ ಮೇಲೆ ಶೇ.5% ರಷ್ಟು ಸಹಾಯಧನ.<br><br>(ಆ) <u>ಜವಳಿ ನೀತಿ ಯೋಜನೆಗಳು:-</u><br><br>ಜವಳಿ ಕೈಗಾರಿಕೆಗಳನ್ನು ಉತ್ತೇಜಿಸಲು ರಾಜ್ಯದಲ್ಲಿ ಹೊಸದಾಗಿ ಸ್ಥಾಪಿಸಲ್ಪಡುವ / ವಿಸ್ತರಣ / ಆಧುನೀಕರಣ / ವೈವಿಧ್ಯೀಕರಣ ಘಟಕಗಳಿಗೆ ರಿಯಾಯಿತಿ ಮತ್ತು ಪ್ರೋತ್ಸಾಹನಗಳನ್ನು ಒದಗಿಸಲು ಅನುಕೂಲವಾಗುವಂತೆ ದಿನಾಂಕ:04.11.2019 ರಂದು ನೂತನ ಜವಳಿ ಮತ್ತು ಸಿದ್ಧ ಉಡುಪು ನೀತಿ 2019-24ನ್ನು ರಾಜ್ಯ ಸರ್ಕಾರವು ಜಾರಿಗೆ ತಂದಿರುತ್ತದೆ. ಈ ಯೋಜನೆಯಡಿಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ/ ವಿಕಲಚೇತನರು/ ಮಾಜಿ ಸೈನಿಕರು/ ಮಹಿಳೆಯರು/ ಅಲ್ಪಸಂಖ್ಯಾಂತರ ಫಲಾನುಭವಿಗಳಿಗೆ ಸಾಲಾಧಾರಿತ ಬಂಡವಾಳ ಸಹಾಯಧನ ಹೆಚ್ಚುವರಿಯಾಗಿ ಶೇ.5 ರಷ್ಟು ನೀಡುವ ಅವಕಾಶ ಇರುತ್ತದೆ.<br><br><u>ನೂತನ ಜವಳಿ ನೀತಿ ಯೋಜನೆ:-</u><br><br>ಈ ಯೋಜನೆಯಡಿ ಅಡ್ವಾನ್ಸ್ ಸೀವಿಂಗ್ ಮಿಷಿನ್ ಆಪರೇಟರ್/ ಕೈಮಗ್ಗ/ ವಿದ್ಯುತ್ ಮಗ್ಗ ನೇಯ್ಗೆ ತರಬೇತಿ ನೀಡಲಾಗುತ್ತಿದೆ. |
| ಆ) | ಪ್ರಸ್ತುತ ಅಥವಾ ಮುಂಬರುವ ವರ್ಷಗಳಲ್ಲಿ ಕೈಮಗ್ಗ ಉತ್ಪಾದನೆಯನ್ನು ಪ್ರೋತ್ಸಾಹಿಸುವ ಯಾವುದಾದರೂ ನೂತನ ಯೋಜನೆ ಜಾರಿಗೊಳಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ? (ವಿವರ ನೀಡುವುದು) | ಕೈಮಗ್ಗ ಉತ್ಪಾದನೆಯನ್ನು ಪ್ರೋತ್ಸಾಹಿಸಲು ಪ್ರಸ್ತುತ ಮೇಲಿನ ಯೋಜನೆಗಳ ಜೊತೆಗೆ 2022-23ನೇ ಸಾಲಿನ ಆಯವ್ಯಯದಲ್ಲಿ ಈ ಕೆಳಕಂಡ ಯೋಜನೆಗಳನ್ನು ಘೋಷಿಸಲಾಗಿದೆ:-<br>1) ನೋಂದಾಯಿತ ಕೈಮಗ್ಗ ನೇಕಾರರಿಗೆ "ನೇಕಾರ್ ಸಮ್ಮಾನ್" ಯೋಜನೆಯಡಿಯಲ್ಲಿ ರೂ.2.000/-ಗಳ ವಾರ್ಷಿಕ ಆರ್ಥಿಕ ನೆರವನ್ನು ರೂ.5000 ಗಳಿಗೆ ಹೆಚ್ಚಳ.<br>2) ರಾಜ್ಯದ ಸಹಕಾರಿ ಮತ್ತು ವಾಣಿಜ್ಯ ಬ್ಯಾಂಕ್‌ಗಳ ಮೂಲಕ ನೇಕಾರರು ಪಡೆಯುವ ಸಾಲದ ಮೇಲೆ ಶೇ.8 ರಷ್ಟು ಬಡ್ಡಿ ಸಹಾಯಧನ ಸೌಲಭ್ಯ.<br>3) ನೇಕಾರರ ಮಕ್ಕಳಿಗೆ ಶಿಕ್ಷಣಕ್ಕೆ ವಿದ್ಯಾರ್ಥಿ ವೇತನಯೋಜನೆ. |

ಸಂ: CI 91 JAKE 2022

(ಶಂಕರ ಬ ಪಾಟೀಲ ಮುನೇನಕೊಪ್ಪ)
ಕೈಮಗ್ಗ ಮತ್ತು ಜವಳಿ, ಸಕ್ಕರೆ ಹಾಗೂ ಕಬ್ಬು ಅಭಿವೃದ್ಧಿ ಸಚಿವರು